<u>ಕರ್ನಾಟಕ ವಿಧಾನ ಪರಿಷತ್ತು</u>

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1469

02. ಸದಸ್ಯರ ಹೆಸರು : ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ)

03. ಉತ್ತರಿಸುವ ದಿನಾಂಕ : 19.03.2020

04. ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಅಗತ್ಯಕ್ಕಿಂತ ಹೆಚ್ಚಿನ ಪೊಲೀಸ್ ಸಿಬ್ಬಂದಿ ಎರವಲು / ಓಓಡಿ ಸೇವೆಯ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವುದು ನಿಜವೇ; ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವವರ ಹೆಸರು, ಹುದ್ದೆ ಮತ್ತು ಯಾವ ದಿನಾಂಕದಿಂದ ಕೆಲಸ ನಿರ್ವಹಿಸುತ್ತಿದ್ದಾರೆ. | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಅಗತ್ಯಕ್ಕಿಂತ ಹೆಚ್ಚಿನ ಪೊಲೀಸ್ ಸಿಬ್ಬಂದಿ ಎರವಲು / ಓಓಡಿ ಸೇವೆಯ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲ.<br><br>ಬೆಂಗಳರು ಅಭಿವೃದ್ಧಿ ಪ್ರಾಧಿಕಾರದಲ್ಲಿ ನಿಯೋಜನೆ ಆಧಾರದ ಮೇಲ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಮಾಹಿತಿಯನ್ನು **ಅನುಬಂಧ**ದಲ್ಲಿ ಒದಗಿಸಲಾಗಿದೆ. |
| ಆ) | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಪೊಲೀಸ್ ಇಲಾಖೆಯ ಎರವಲು ಸೇವೆಯ ಅಧಿಕಾರಿ / ನೌಕರರು ಈ ಹಿಂದೆ ಎರವಲು ಸೇವೆಯ ಆಧಾರದಲ್ಲಿ ಬಿ.ಡಿ.ಎ.ಗೆ ನಿಯೋಜನೆಗೊಂಡಿದ್ದರೆ, ಇದ್ದಲ್ಲಿ, ಅಂತಹವರ ಹೆಸರು, ಹುದ್ದೆ ಮತ್ತು ಎಷ್ಟು ಬಾರಿ ನಿಯೋಜನೆಗೊಂಡಿದ್ದರು ಎಂಬ ವಿವರಗಳನ್ನು ನೀಡುವುದು; | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಯವರಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಈ ಹಿಂದೆ ಎರವಲು/ಓಓಡಿ ಆಧಾರದ ಮೇಲೆ ನಿಯೋಜನೆಗೊಂಡಿರುವುದಿಲ್ಲ. |
| ಇ) | ನಿಯೋಜನೆಗೊಂಡಿರುವ ಪೊಲೀಸ್ ಸಿಬ್ಬಂದಿಗಳು ಪ್ರಾಧಿಕಾರದಲ್ಲಿ ನಿರ್ವಹಿಸಬೇಕಾದ ಕೆಲಸ ಕಾರ್ಯಗಳ ವಿವರ ನೀಡುವುದು; | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ನಿಯೋಜನೆಗೊಂಡಿರುವ ಸಿಬ್ಬಂದಿಗಳ ಕೆಲಸ ಕಾರ್ಯಗಳ ವಿವರ ಕೆಳಕಂಡಂತಿದೆ.<br>1. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸ್ವತ್ತು ಸಂರಕ್ಷಣೆ, ಪ್ರಾಧಿಕಾರದ ಸ್ವತ್ತಿನಲ್ಲಿ ಅನಧಿಕೃತ ಒತ್ತುವರಿ/ಅತಿಕ್ರಮಣಗಳನ್ನು ಗುರುತಿಸಿ ತಡೆಗಟ್ಟುವುದು, ಅನಧಿಕೃತ ಒತ್ತುವರಿ/ನಿರ್ಮಾಣಗಳ ತೆರವು ಕಾರ್ಯಾಚರಣೆ ಸಂದರ್ಭದಲ್ಲಿ ಮತ್ತು ಪ್ರಾಧಿಕಾರದ ವಿವಿಧ ಯೋಜನೆಗಳಿಗೆ ರೈತರುಗಳಿಂದ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳುವ ಮತ್ತು ಯೋಜನೆಗಳನ್ನು ಕಾರ್ಯಗತಗೊಳಿಸುವ ಸಂದರ್ಭಗಳಲ್ಲಿ ಪ್ರಾಧಿಕಾರದ ಅಧಿಕಾರಿ/ಸಿಬ್ಬಂದಿಗಳಿಗೆ ಪೊಲೀಸ್ ರಕ್ಷಣೆ/ಭದ್ರತೆ ನೀಡುವ ಕಾರ್ಯಗಳು.<br>2. ಅನುಮಾನಾಸ್ಪದ ನಿವೇಶನ ಹಂಚಿಕೆ ಪ್ರಕರಣಗಳು ಹಂಚಿಕೆದಾರರ/ವಾರಸುದಾರರ ನೈಜತೆ ಪರಿಶೀಲನೆ, ನಕಲು ಕಡತಗಳನ್ನು ತೆರೆಯುವ ಪ್ರಕರಣಗಳು, ಬೋಗಸ್ ದಾಖಲಾತಿಗಳನ್ನು ಸೃಷ್ಟಿಸಿಕೊಂಡು ಪ್ರಾಧಿಕಾರದ ಸ್ವತ್ತನ್ನು ಕಬಳಿಸಲು ಪ್ರಯತ್ನಿಸುವ ಪ್ರಕರಣಗಳು ಮತ್ತು ಪ್ರಾಧಿಕಾರವು ಭೂಸ್ವಾಧೀನಪಡಿಸಿಕೊಂಡ ಜಮೀನುಗಳ ಭೂಮಾಲೀಕರಿಗೆ ಭೂಪರಿಹಾರ ನೀಡುವ ಸಂಬಂಧ ನೈಜತೆ ಪರಿಶೀಲನೆಗೆ ಪ್ರಾಧಿಕಾರದ ಇತರೆ ವಿಭಾಗಗಳಿಂದ ಕಳುಹಿಸಿಕೊಡುವ ಕಡತಗಳನ್ನು ಮತ್ತು ಸಾರ್ವಜನಿಕರಿಂದ ಸ್ವೀಕರಿಸುವ ದೂರು ಅರ್ಜಿಗಳ ಬಗ್ಗೆ ವಿಚಾರಣೆ/ತನಿಖೆ ನಡೆಸಿ ವಿಚಾರಣಾ ವರದಿಯನ್ನು ನೀಡುವುದು ಮತ್ತು ಮಾನ್ಯ ಆಯುಕ್ತರು ಅನುಮೋದನೆ ನೀಡಿದ ಪ್ರಕರಣಗಳಲ್ಲಿ ಸ್ಥಳೀಯ ಪೊಲೀಸ್ ಠಾಣೆಯಲ್ಲಿ ಪ್ರಾಧಿಕಾರದ ಪರವಾಗಿ ಫಿರ್ಯಾದು ನೀಡಿ ಪ್ರಕರಣಗಳನ್ನು ದಾಖಲಿಸುವ ಕಾರ್ಯಗಳು |

| | | |
|---|---|---|
| ಈ) | ನಿರ್ದಿಷ್ಟಪಡಿಸಿದ ಪೋಲೀಸ್ ಕಾರ್ಯವನ್ನು ಹೊರತುಪಡಿಸಿ ನಿಯೋಜಿತಗೊಂಡ ಪೋಲೀಸರು ಪ್ರಾಧಿಕಾರದ ಕಡತಗಳ ಕಾರ್ಯನಿರ್ವಹಣೆಯನ್ನು ಮಾಡುತ್ತಿರುವುದು ನಿಜವೇ, ಇದ್ದಲ್ಲಿ ಇದಕ್ಕೆ ಕಾರಣವೇನು, ಈ ಕಾರ್ಯನಿರ್ವಹಣೆಯನ್ನು ಪ್ರಾಧಿಕಾರದ ಸಿಬ್ಬಂದಿಗಳು ಕೈಗೊಳ್ಳುವುದಿಲ್ಲವೇ, ಇಲ್ಲದಿದ್ದಲ್ಲಿ ಇದಕ್ಕೆ ಕಾರಣವೇನು; | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಪೋಲೀಸ್ ವಿಭಾಗಕ್ಕೆ ನಿರ್ದಿಷ್ಟಪಡಿಸಿರುವವಂತಹ ಪೋಲೀಸ್ ಕಾರ್ಯವನ್ನು ಹೊರತುಪಡಿಸಿ ಪ್ರಾಧಿಕಾರದ ಕಡತಗಳ ಕಾರ್ಯಗಳನ್ನು ನಿರ್ವಹಿಸುತ್ತಿರುವುದಿಲ್ಲ. |
| ಉ) | ಸದರಿ ಪೋಲೀಸರು ಪೋಲೀಸ್ ಇಲಾಖೆಯಲ್ಲಿ ನೇಮಕಾತಿಯಾದ ಹುದ್ದೆಗೆ ತಕ್ಕಂತೆ ಕೆಲಸ ನಿರ್ವಹಿಸಿ ನ್ಯಾಯ ಒದಗಿಸದೇ ಅನಗತ್ಯವಾಗಿ ಪ್ರಾಧಿಕಾರದಲ್ಲಿ ಎರವಲು ಸೇವೆ ಮೇಲೆ ಕರ್ತವ್ಯ ನಿರ್ವಹಿಸದಂತೆ ತಡೆಗಟ್ಟಲು ಸರ್ಕಾರ ಕೈಗೊಳ್ಳುವ ಕ್ರಮಗಳೇನು? (ವಿವರ ಒದಗಿಸುವುದು) | ಪ್ರಾಧಿಕಾರದ ವೃಂದ ಮತ್ತು ನೇಮಕಾತಿ ನಿಯಮಾವಳಿಗಳಲ್ಲಿ ಪ್ರಾಧಿಕಾರದ ಎಸ್.ಟಿ.ಎಫ್ ಪೋಲೀಸ್ ವಿಭಾಗಕ್ಕೆ ಪೋಲೀಸ್ ಇಲಾಖೆಯಿಂದ ಎರವಲು ಸೇವೆಯ ಮೇಲೆ ಪೋಲೀಸ್ ಅಧಿಕಾರಿ / ಸಿಬ್ಬಂಧಿಗಳನ್ನು ನಿಯೋಜಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ ಮತ್ತು ಮಂಜೂರಾದ ಹುದ್ದೆಗಳಿಗೆ ಮಾತ್ರ ಅಧಿಕಾರಿ / ಸಿಬ್ಬಂದಿಯವರನ್ನು ನಿಯೋಜಿಸಲಾಗುತ್ತಿದೆ. |

HD/19/PPS/2020-PS_B

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1469ಕ್ಕೆ ಸಂಬಂಧಿಸದಿಂತೆ **ಅನುಬಂಧ**

| ಕ್ರ. ಸಂ | ಹೆಸರು (ಶ್ರೀಯುತರು) | ಹುದ್ದೆ | ಕಾರ್ಯನಿರ್ವಹಣೆ ದಿನಾಂಕ |
|---|---|---|---|
| 1. | ಯಶವಂತ ಕುಮಾರ್. ಎಂ. ಆರ್ | ಪಿಎಸ್ಐ | 24/02/2018 |
| 2. | ನಾಗೇಂದ್ರ. ಬಿ.ಎಸ್ | ಸಿಹೆಚ್‌ಸಿ-7526 | 23/03/2015 |
| 3. | ಮಂಜು. ಸಿ.ಆರ್ | ಸಿಹೆಚ್‌ಸಿ-7441 | 23/06/2015 |
| 4. | ಮಧು. ಎಂ.ಕೆ | ಸಿಹೆಚ್‌ಸಿ-8413 | 27/04/2016 |
| 5. | ರಮೇಶ್. ಎಸ್ | ಸಿಹೆಚ್‌ಸಿ-6255 | 22/07/2016 |
| 6. | ಲಕ್ಷ್ಮಣ. ಬಿ.ಕೆ | ಸಿಹೆಚ್‌ಸಿ-7443 | 26/03/2018 |
| 7. | ರಾಮಚಂದ್ರಪ್ಪ | ಸಿಹೆಚ್‌ಸಿ-8058 | 06/07/2019 |
| 8. | ನಾಗರಾಜು.ಟಿ | ಎಹೆಚ್‌ಸಿ-139 | 02/02/2010 |
| 9. | ನರಸಿಂಹಮೂರ್ತಿ.ಹೆಚ್ | ಆರ್‌ಹೆಚ್‌ಸಿ | 26/07/2014 |
| 10. | ನಾಗರಾಜು. ಆರ್ | ಎಪಿಸಿ-2579 | 04/11/2011 |
| 11. | ಚಿಕ್ಕರಾಮಯ್ಯ | ಎಪಿಸಿ-2132 | 04/04/2015 |
| 12. | ರವಿ. ಬಿ.ಎನ್ | ಎಪಿಸಿ-1223 | 28/01/2019 |
| 13. | ಶ್ರೀನಿವಾಸ.ಕೆ.ವಿ | ಎಪಿಸಿ-1718 | 29/01/2019 |
| 14. | ಹರೀಶ್.ಎನ್.ಎಸ್ | ಸಿಪಿಸಿ-13199 | 07/02/2019 |
| 15. | ಭೀಮೇಶ್. ಓ.ಎಸ್ | ಎಪಿಸಿ-901 | 08/02/2019 |
| 16. | ಸಿದ್ದೇಶಗೌಡ.ಯು | ಎಪಿಸಿ-594 | 08/02/2019 |
| 17. | ಯೋಗೇಶ್ವರಚಾರ್. ಎಂ | ಎಪಿಸಿ-1614 | 08/02/2019 |
| 18. | ರಂಗಸ್ವಾಮಿ. ಎಂ.ಟಿ | ಎಪಿಸಿ-1270 | 22/02/2019 |
| 19. | ಮಂಜುನಾಥ. ಎಂ.ಕೆ | ಸಿಪಿಸಿ-11324 | 07/03/2019 |
| 20. | ಆಂಜನೇಯ.ಎನ್.ಎಸ್ | ಎಪಿಸಿ-1120 | 01/04/2019 |
| 21. | ಗುರುಮೂರ್ತಿ.ಎ.ಎಂ | ಎಪಿಸಿ-1649 | 05/03/2019 |
| 22. | ಫಾತೀಮಾ | ಮಪಿಸಿ-12773 | 01/01/2019 |